# ಅಂತ್ಯ ಸಂಸ್ಕಾರ

## ಈ ಕಾರ್ಯಕ್ರಮಕ್ಕೆ ಬೇಕಾಗುವ ಸಲಹೆ ಮತ್ತು ಸಲಕರಣೆಗಳ ವಿವರ

ಕೆ. ತಿಮ್ಮಪ್ಪ ಮಂಜ
ಸಿದ್ಧಾಪುರ, ಕುಂದಾಪುರ ತಾಲ್ಲೂಕು
ದಕ್ಷಿಣ ಕನ್ನಡ

ಕರ್ತೃವಿನ ಪತ್ನಿಯರು-ಹೊರಗಾದರೆ (ಮುಟ್ಟಾದರೆ)

ಹತ್ತರ ಮೇಲಿನ ಕೆಲಸ ನಿಲ್ಲುತ್ತದೆ. ೧೧ ಮತ್ತು ೧೨ಕ್ಕೆ ಪತ್ನಿಯರು ಮುಟ್ಟಾಗಿರಬಾರದು. ಅದರ ಬಗ್ಗೆ ಯೋಚಿಸಿ ತಕ್ಕ ವ್ಯವಸ್ಥೆ ಮಾಡತಕ್ಕದ್ದು.

ಮುಂದೆ ಬರೆದಿರುವ ಅಧ್ಯಾಯ ದಿವ್ಯ ಕಾರ್ಯಕ್ರಮವು ನನ್ನ ಅಭಿಪ್ರಾಯದ ಮೇರೆಗೆ ಬರೆದಿರುತ್ತೇನೆ. ಕರ್ತೃವು ಅವರ ಪುರೋಹಿತರಿಂದ ಕೇಳಿ ಅನುಭವ ಪಡೆದುಕೊಳ್ಳುವುದು ಉತ್ತಮ. ಕಾರ್ಯಕ್ರಮದಲ್ಲಿ ಬದಲಾವಣೆ ಇರಬಹುದು. ಸಾಹಿತ್ಯ ಬರೆದಿದ್ದರಲ್ಲಿ ಬಿಟ್ಟು ಹೋದದ್ದು ಇರಬಹುದು.

## ದಹನಕ್ಕೆ ಬೇಕಾಗುವ ಅನುಕೂಲತೆಗಳು-ಚಿತೆ

ಈ ದಿವಸಕ್ಕೆ ಸಂಬಂಧಪಟ್ಟವರಿಗೆ ವರ್ತಮಾನ ಕೊಡುವುದು.
ಪುರೋಹಿತರಿಗೆ ಹೇಳಿಕೆ ಹೇಳದ ಕೂಡಲೆ ಬರುವ ಏರ್ಪಾಡು.
ದಾನಕ್ಕೆ ಬ್ರಾಹ್ಮಣರಿಗೆ ಹೇಳಿಕೆ. ಕ್ಷೌರಿಕನನ್ನು ಸಮಯ ತಿಳಿಸಿ ಹೇಳುವುದು.

ಚಿತೆ ಮಾಡುವ ಜಾಗ ನಿಶ್ಚಯಿಸಿ ಮಾಡುವವರಿಗೆ ಹೇಳುವುದು. ಹಾರೆ, ಸಬ್ಬಲು, ಕತ್ತಿ, ಕೊಡ್ಲಿ, ಅಡ್ಡಮುರಿ.

ಚಿತೆ ಮಾಡುವ ಜಾಗದಲ್ಲಿ 2 ಅಡಿ ಅಗಲ, 6 ಅಡಿ ಉದ್ದ, 1 $^{1}/_{2}$ ಅಡಿ ಆಳ, 1 $^{1}/_{2}$ ಅಡಿ ಅಗಲ ಕ್ಷಿ ತ ಮಾಡಿದರೆ ಗಾಳಿ ಬಂದರೆ ದಹನಕ್ಕೆ ಅನುಕೂಲ.

ಹೊಂಡಕ್ಕೆ ಮೂರು ಅಡ್ಡಕೊಳ್ಳಿ ಹಾಕಿ ನಂತರ 7 $^{1}/_{2}$ ಅಡಿ ಉದ್ದದ ಕಟ್ಟಿಗೆ ಕೊಡುವುದು. ಹಸಿ ಬಲವಾದ ಗುಟ್ಟ, ನಾಲ್ಕು ತಂದು ಎರಡು ಬದಿಗೆ ಹುಗಿಯುವುದು.

ಗುಟ್ಟದ ಎತ್ತರ ಚಿತೆಗೆ ಸರಿಸಮಾನವಿರತಕ್ಕದ್ದು. ಮಾವಿನ ಕಟ್ಟಿಗೆ ಹಾಕತಕ್ಕದ್ದು. ನಂತರ ಮುಚ್ಚಲಿಕ್ಕೆ ಬೇಕಾಗುವಷ್ಟು ಮಾವಿನ ಸೊಪ್ಪು ಚಿತೆ ಸಮೀಪ ಇಡತಕ್ಕದ್ದು. ನಂತರ ಮೇಲೆ ಹಾಕುವ ಸಪೂರ ಕಟ್ಟಿಗೆ ಇಡತಕ್ಕದ್ದು.

ನೀರಿನ ಅನುಕೂಲತೆ ನೋಡಿ ಚಿತೆ ಮಾಡುವುದು ಉತ್ತಮ.

ಚಿತೆಗೆ ಬೆಂಕಿ ಹಿಡಿಯುವಾಗ ಹಾಗೆ ತಲೆ ಬುಡಕ್ಕೆ ಮಡಲು ಕಬ್ಬಿನ ಜೋಗಟ ಸುರಿಯತಕ್ಕದ್ದು.

ಮಳೆ ಬರುವ ಸಮಯವಾದರೆ ತುಂಬಾ ಯೋಚಿಸಿ ಕೆಲಸ ಮಾಡಿ ಚಿತೆ ತಯಾರಿಸಿ ಬಾಳೆ ಹಡೆ ಮುಚ್ಚಲಿಕ್ಕೆ ಮಾಡುವುದು ಅಥವಾ ಬೇರೆ ಅನುಕೂಲತೆ ಇದ್ದರೆ ಮಾಡುವದು.

ಇನ್ನು ಕಟ್ಟಿಗೆ ಒದ್ದೆಯಾದಲ್ಲಿ ಚಿಮಣಿ ಎಣ್ಣೆ ಮುಂಜಾಗರೂಕತೆಗೆ ತಂದಿಟ್ಟುಕೊಂಡು ಅನಾನುಕೂಲತೆಯಾದಲ್ಲಿ ಉಪಯೋಗಿಸುವುದು.



## ಗೃಹದಲ್ಲಿ ಅನುಕೂಲತೆ

ಮೃತಪಡುವ ಕಾಲ ತಿಳಿದು ಬಂದಲ್ಲಿ ಎಲ್ಲರೂ ತೀರ್ಥವನ್ನು ಬಾಯಿಗೆ ಹಾಕಿ ಹರಿನಾಮ ಸ್ಮರಣೆ ಮಾಡುವುದು. ತದ ನಂತರ ಸ್ನಾನ ಎಲ್ಲರೂ ಮಾಡಬೇಕು. ನೆಲ ಸಾರಿಸಿ ದರ್ಭೆಯನ್ನು ಹಾಕಿ ಮಲಗಿಸುವುದು. ಶಿರವನ್ನು ತೊಡೆಯ ಮೇಲೆ ಇಟ್ಟುಕೊಳ್ಳುವುದು. ಆತ್ಮ ಶರೀರ ಬಿಟ್ಟದ್ದು ತಿಳಿದ ನಂತರ ಹೊಸ ಬಟ್ಟೆ ಮುಚ್ಚುವುದು. ಶಿರ ದಕ್ಷಿಣ ಭಾಗದಲ್ಲಿ ಮಲಗಿಸುವಾಗ ಸ್ವಲ್ಪ ಜಾಗ ಇಟ್ಟುಕೊಳ್ಳುವುದು. ಅಲ್ಲಿ ತೆಂಗಿನಕಾಯಿ ಒಡೆದು, ಅಡಿ ಅಕ್ಕಿ ಹಾಕಿ, ಎರಡು ಕಡಿ ಕಾಯಿಗೆ ತುಪ್ಪ ಹಾಕಿ ಹೂಬತ್ತಿ ಮಾಡಿ ದೀಪ ಹಚ್ಚತಕ್ಕದ್ದು. ಈ ದೀಪ ಆರಬಾರದು. ಆ ದೀಪದಿಂದ ಸ್ನಾನದ ಒಲೆಗೆ ಬೆಂಕಿ ಹಾಕಬೇಕು. ಈ ಬೆಂಕಿಯನ್ನು ಚಿತೆಗೆ ಕೊಂಡು ಹೋಗುವುದು.

ಸ್ನಾನ ಮಾಡಿಸುವ ಜಾಗದಲ್ಲಿ ಹಾಕುವ ಹಲಿಗೆ ಹತ್ತು ದಿವಸ ತೆಗೆಯಬಾರದಾದ ಕಾರಣ, ಜಾಗ ನಿಶ್ಚಯಿಸಿ ಆರು ಅಡಿ ಉದ್ದದ ಹಲಗೆ ಅಲ್ಲಿ ಇಟ್ಟು ಸಮೀಪ ಒಲೆ ಮಾಡತಕ್ಕದ್ದು.

ದೀಪ ತಲೆಯಡಿ ಇಟ್ಟ ಕೂಡಲೆ ಅಥವಾ ಮುಂಚೆ ದರ್ಭೆಯಿಂದ ಎರಡು ಕಾಲು ಜೋಡಿಸಿ ಎರಡು ಹೆಬ್ಬೆರಳಿಗೆ ಕಟ್ಟುವುದು. ಕೈಯೆರಡನ್ನು ಎದೆ ಮೇಲೆ ಇಟ್ಟು ಎರಡು ಹೆಬ್ಬೆರಳು ಒಟ್ಟು ಮಾಡಿ ಕಟ್ಟುವುದು. ಏಣಿಗೆ (ಹೊತ್ತುಕೊಂಡು ಹೋಗಲಿಕ್ಕೆ) ನಾಲ್ಕು ಕೋಲು ಉದ್ದದ ಗಳ ಎರಡು ಹಡೆಮುಂಡೆ ಅಥವಾ ದಬ್ಬೆ, ಅರ್ಧಕೋಲು ಉದ್ದ, ಮಡೆಹಗ್ಗ, ಕಲ್ಲಿನ ತ್ರಿಕೋಣ, ದಬ್ಬೆಯಿಂದ ಅಗ್ನಿಕೊಂಡು ಹೋಗಲಿಕ್ಕೆ.

ಹೊರಲಿಕ್ಕೆ ಮಾಡುವ ನಾಲ್ಕು ಕೋಲು ಉದ್ದದ್ದು ಹಸಿ ತೋರದ ಬುಡದ ಕಾಲುತೆಮೆ, ಕೊಂಗಳ ಆದರೆ ಉತ್ತಮ, ನಂತರ ಚಿತೆಯಲ್ಲಿ ಕೊಳ್ಳಿ ದೂಕಲಿಕ್ಕೆ ಅನುಕೂಲವಾಗುತ್ತದೆ. ಇಡಿ ಬಾಳೆ ಎಲೆ (ಹಡೆ) ಹಾಸಿ ಸ್ನಾನದ ನಂತರ ಮಲಗಿಸಿ ವಸ್ತ್ರ ಮುಚ್ಚಿ ಮಡೆ ಹಗ್ಗದಿಂದ ಕಟ್ಟುಹಾಕತಕ್ಕದ್ದು.

ನಿತ್ಯವಿಧಿಯಲ್ಲಿ ಮಳೆಗಾಲವಾದರೆ ತಗಡಿನ ಚಪ್ಪರ- (ಬೇರೆ ಪ್ರಾಣಿ ಮುಟ್ಟದಿದ್ದ ಹಾಗೆ)

### ಸಾಹಿತ್ಯ

ಮಡಕೆ - ಅಗ್ನಿಕೊಂಡು ಹೋಗಲಿಕ್ಕೆ
ಮಣ್ಣಿನ ಕೊಡ - ಕೊಡಪಾನ ನೀರು ಹಿಡಿಯುವ ಹಾಗೆ ಇರುವುದು
ಗೆರ್ಸಿ - ಇದರಲ್ಲಿ ಸಾಹಿತ್ಯ ಹಾಕುವುದು (ಮನೆಗೆ ತರುವುದಲ್ಲ)
ಹಡಿಗೆ - ಸಾಹಿತ್ಯ ಹಾಕಲಿಕ್ಕೆ (ಮನೆಗೆ ತರಬಹುದು)
ತಂಬಿಗೆ - ಕವಳಿಗೆ ಸೌಟು-ಕಬ್ಬಿಣ (ಶಸ್ತ್ರ ಇದು ಕ್ರಿಯೆ ಹಿಡಿಯುವವರಿಗೆ)
ದರ್ಭೆ - ಎಳ್ಳು
ಗೋಮೂತ್ರ - ಗೋಮಯ-ಹಾಲು-ಮೊಸರು-ತುಪ್ಪ-ತೆಂಗಿನೆಣ್ಣೆ

ಇದನ್ನು ಒಂದು ಎಲೆ ದೊನ್ನೆಗೆ ಹಾಕುವುದು. ಛತ್ರಿ, ಎಲೆ ೨, ಸಮಿದ ೩, ಶಿಲಾ ಸ್ಥಾಪನೆಗೆ ಬೆಣಗಲ್ಲು ೩.

ತುಳಸಿ ಮಾಲೆ - ವಿಭೂತಿ - (ಹೆಂಗಸರಾದರೆ ಮುತ್ತೈದು ಕುಂಕುಮ) ತುಳಸಿ ಒಣಗಿದ ಕಡ್ಡಿ ಗಂಧದ ತುಂಡು - ವಿಳ್ಯದೆಲೆ ಅಡಿಕೆ ಗುದ್ದಿದ್ದು (ಹೊಸ್ತಿಲ ಮೇಲೆ) ಇಟ್ಟುಕೊಳ್ಳುವುದು ಕ್ಷೌರಿಕನಿಗೆ ಕೊಡತಕ್ಕ ಮರ್ಯಾದೆ

ದಶದಾನಕ್ಕೆ ತಟ್ಟೆ, ತೆಂಗಿನಕಾಯಿ-ದೀಪದಾನಕ್ಕೆ ಸೌಡ್ರು ೨, ವಸ್ತ್ರ ೨

ಸ್ನಾನಕ್ಕೆ ನೀರು ಕಾಯಿಸಿ ಅದನ್ನು ತರಲಿಕ್ಕೆ ಪಾತ್ರೆ-ಸ್ನಾನಕ್ಕೆ ತಂಬಿಗೆ

ಕೃಚ್ಛ್ರ ದೊಡ್ಡದು ೧, ಸಣ್ಣದು ೧(14ರ ಸಂಖ್ಯೆ)

<u>ದಾನ</u>

1. ಕಂಚಿನ ಪಾತ್ರೆಯಲ್ಲಿ ಎಳ್ಳುದಾನ
2. ಹಿರಣ್ಯ
3. ದೀಪ
4. ಗೋವು(ಕಾಯಿ)

<u>ದಶದಾನ</u>

1. ಗೋವು(ಕಾಯಿ)
2. ಭೂಮಿ
3. ತಿಲ
4. ಹಿರಣ್ಯ
5. ಆಜ್ಯ
6. ವಾಸ
7. ಧಾನ್ಯ
8. ಗುಡ
9. ರೂಪಾಯಿ (ಬೆಳ್ಳಿ)
10. ಲವಣ

<u>ದಹನ ಮಧ್ಯಕಾಲ ದಾನ</u>

ವಸ್ತ್ರ,
ಹಿರಣ್ಯ



## ನಿತ್ಯವಿಧಿಗೆ

ದಹನ ಮುಗಿಸಿ ಬರುವುದರೊಳಗೆ ಚರು ಪುರೋಹಿತರಿಂದ ತಿಳಿದು ಮಾಡಿ ಇಡತಕ್ಕದ್ದು- ನಿತ್ಯ ವಿಧಿ ಜಾಗ ನಿರ್ಣಯಿಸತಕ್ಕದ್ದು - ಅಲ್ಲಿ ವೇದಿಕೆ ಮಾಡಲಿಕ್ಕೆ ಹಾರೆ ವಗೈರೆ.

| | |
|---|---|
| ಕಂಡ್ಲಂಗಡ್ಲೆ ಗುತ್ತಿ | ರೊಕ್ಕ- |
| ದರ್ಭೆ- ಕೂರ್ಚ | ದಕ್ಷಿಣೆ- |
| ಬಾಳೆಹಣ್ಣು- | ಕಾಸಿದ ಬಾಳೆ ಎಲೆ |
| ವಿಳ್ಯದಲೆ- ಅಡಿಕೆಹೋಳು | ಪ್ರೇತಶಿಲೆ |
| ಎಳ್ಳು- | ತಂಬಿಗೆ |
| ಹಾಲುಮೊಸರು | ಕವಳಿಗೆ ಸೌಟು |
| ಅಕ್ಕಿಸೇರು ೧ | ಕೈಗೆ ಕಟ್ಟಿದ ವಸ್ತ್ರ |
| ತೆಂಗಿನಕಾಯಿ | ಕಬ್ಬಿಣ (ಶಸ್ತ್ರ) |

ನಿತ್ಯವಿಧಿ ಪೂರೈಸಿ ಬರುವಾಗ ತಂಬಿಗೆ ಯಾ. ಕವಳಿಗೆ ಸೌಟಿನಲ್ಲಿ ನೀರು ತಂದು ಸ್ನಾನ ಮಾಡಿಸಿದ ಹಲಿಗೆಗೆ ಹಾಕತಕ್ಕದ್ದು. ಮಧ್ಯಾಹ್ನ ಊಟಕ್ಕೆ ಹಾಕಿದ ಅನ್ನವನ್ನು ಒಂದು ಮುಷ್ಟಿ ತಂದು ಹಲಗೆಗೆ ಹಾಕಿ ಅನಂತರ ಊಟ ಮಾಡುವುದು. ಇದು ಪ್ರತಿ ದಿವಸ ಮಾಡತಕ್ಕದ್ದು. ತ್ರಿಕಾಲ ಸ್ನಾನ ಮಾಡತಕ್ಕದ್ದು.

ಮೃತಪಟ್ಟ ಜಾಗದ ಮೇಲೆ ಮೊಳೆ ಹೊಡೆದು ಜನಿವಾರ ನೂಲು ನೇತುಹಾಕಿ ಕೆಳಗೆ ಇಳಿಬಿಟ್ಟು ಅಲ್ಲಿ ಹಾಲುಪಾತ್ರೆಯಿಟ್ಟು ಅದರೊಳಗೆ ನೂಲು ಹಾಕತಕ್ಕದ್ದು. ಬೆಕ್ಕು ಹಾಲು ಕುಡಿಯದ ಹಾಗೆ ಜಾಗ್ರತೆ ಮಾಡತಕ್ಕದ್ದು. ಬೆಳಿಗ್ಗೆ ಇಟ್ಟ ಹಾಲು ಸಾಯಂಕಾಲ ತೆಗೆದು ಪಾತ್ರೆ. ತೊಳೆದು ಹೊಸ ಹಾಲು ಇಡತಕ್ಕದ್ದು. ದೀಪ ಹಚ್ಚಬೇಕು, ಮಾರನೆ ದಿವಸ ಬೆಳಿಗ್ಗೆ ಆ ಜಾಗ ಸಾರಿಸಿ ಚೊಕ್ಕ ಮಾಡಿ ಮುಂಚಿನಂತೆ ಹಾಲು ಇಡತಕ್ಕದ್ದು. ಇದು 10 ದಿವಸ ಪರಿಯಂತ್ರ ಮಾಡತಕ್ಕದ್ದು. ಹತ್ತನೆ ದಿವಸ ವಿಸರ್ಜನೆ.

ಕ್ರಿಯಾ ಹಿಡಿದವರು ದಿಕ್ಷೆಯಲ್ಲಿರತಕ್ಕದ್ದು. ದೇಹದಲ್ಲಿ ಚಿನ್ನ-ಬೆಳ್ಳಿ ಒಡವೆ ಧರಿಸಬಾರದು.

ಕ್ರಿಯಾ ಹಿಡಿದವರು ಎಷ್ಟು ಜನ, ಚರು ಎಷ್ಟು ಬೇಕಂತ ಪುರೋಹಿತರಿಂದ ತಿಳಿದು, ಅವರು ಬರುವ ಸಮಯದ ಮೊದಲೆ ಮಾಡತಕ್ಕದ್ದು.

ಬೆಳಿಗ್ಗೆ ಎದ್ದಕೂಡಲೆ ಸ್ನಾನ ಮಾಡಬೇಕು.

ಯಜ್ಞೋಪವೀತ ಎಷ್ಟು ಬೇಕಂತ ನಿರ್ಣಯಿಸಿ ಮುಂದಾಗಿ ಹೇಳಿ ಬೇಕಾದ ದಿವಸ ತರಿಸತಕ್ಕದ್ದು.

11ನೇ ದಿವಸಕ್ಕೆ ಮುಂಚಿನ ದಿವಸ ಸಾಯಂಕಾಲ ಹಾಲು ಎಷ್ಟು ಬೇಕು ಮಾರನೆ ದಿನ ಮಜ್ಜಿಗೆಗೆ ಎಂದು ನಿರ್ಣಯಿಸಿ, ಬ್ರಾಹ್ಮಣರಲ್ಲಿ ಕೊಟ್ಟು 11ನೇ ಕಾರ್ಯಕ್ರಮ ಮುಗಿದು ಊಟದ ಸಮಯ ತರಿಸುವ ಏರ್ಪಾಡು.

ಶದ ನಂತರ ಪ್ರತಿ ದಿವಸ ಬೆಳಿಗ್ಗೆ ಸಾಯಂಕಾಲ ಹಾಲು ಎಷ್ಟು ಬೇಕಂತ ನಿರ್ಣಯಿಸಿ ಮುಂದಾಗಿ ಹಾಲಿಗೆ ಹೇಳತಕ್ಕದ್ದು.

೨ನೇ ದಿವಸ ನಿತ್ಯವಿಧಿ (೧-೩-೫-೭-೯ ವಿಷಮ ದಿವಸ ಹಿಟ್ಟಿನ ಶ್ರಾದ್ಧ)

ಅಕ್ಕಿ ಹಿಟ್ಟು - ೧೧ನೇ ದಿವಸದವರೆಗೆ ಬೇಕಾಗುವಷ್ಟು- ವಿಷಮ ಹಿಟ್ಟಿನ ಶ್ರಾದ್ಧ ಮತ್ತು ಪೋಲಿಕ ಭಕ್ಷ್ಯಕ್ಕೆ- (ಚರುವಿಗೆ ಬಾಳೆಕಾಯಿ-ಹೆಸರು ಬೇಳೆ ಹಾಕತಕ್ಕದ್ದು)

ನಿತ್ಯವಿಧಿಗೆ-ಯಾವ ಯಾವ ದಿವಸ ಏನು ಸಾಹಿತ್ಯ ಬೇಕೆಂದು ಪುರೋಹಿತರಿಂದ ತಿಳಿದು ಮಾಡತಕ್ಕದ್ದು, ಚರಿಗೆ ಏನು ಹಾಕಬೇಕೆಂದು ತಿಳಿಯತಕ್ಕದ್ದು.

ಪುರೋಹಿತರು ಬರುವ ಸಮಯ ತಿಳಿದು ಎಲ್ಲರೂ ಸ್ನಾನ ಮಾಡಿ ಚರುಮಾಡಿ ಇಡತಕ್ಕದ್ದು. ದೂರದವರಾದರೆ ಬೇರೆಯವರಲ್ಲಿ ಊಟಕ್ಕೆ ಹೇಳತಕ್ಕದ್ದು (ಮಾತನಾಡಿಸಲಿಕ್ಕೆ ಬಂದವರಿಗೆ)

ಈ ದಿವಸ ಮಧ್ಯಾಹ್ನದ ಮೇಲೆ ಎಲ್ಲರೂ ಕೂತು ಖರ್ಚು ಮಾಡುವ ಹಣ ನಿರ್ಣಯಿಸತಕ್ಕದ್ದು. ಸಂತರ್ಪಣೆ-ದಕ್ಷಿಣೆ- ಬಳಗದ ಜವಳಿಯಲ್ಲಿ ವೇಸ್ಟಿ-ಸೀರೆ - ಕಣ ಮಕ್ಕಳ ಬಟ್ಟೆ-ಕರ್ಮಾಂಗದ ಜವಳಿ-ಪಾತ್ರೆ-ದಾನಕರು-ಗರುಡ ಪುರಾಣ-ಯಾವ ಯಾವ ಭಾಗಕ್ಕೆ ಯಾವ ರೀತಿಯಲ್ಲಿ ಹೋಗತಕ್ಕದೆಂದು ನಿರ್ಣಯ. ಪುರೋಹಿತರಿಂದ ಕೂತು ಆಲೋಚಿಸಿ, ಪಾಣಿಪಂಜಿ ದೊಡ್ಡದು-ಸಣ್ಣದು. ವೇಸ್ಟಿ I IIನೇ ತರಗತಿ ಎಷ್ಟು ಶಾಲು-ಪಾತ್ರೆ ತಟ್ಟೆ-ಚರಿಗೆ ಸಟ್ಟುಗ, ತಂಬಿಗೆ-ಕವಳಿಗೆ, ದೇವಪೂಜಾ ಸಾಹಿತ್ಯ ಇತ್ಯಾದಿ ಪಟ್ಟಿ ಮಾಡತಕ್ಕದ್ದು. ಶ್ರವಣ ಆರಾಧನೆ ಮಾಡುವುದಾದರೆ ಪಂಚೆ-ಶಾಲು-ಕವಳಿಗೆ ಸೌಟು-ಯಜ್ಞೋಪವಿತ್ರ, ಪಾತಾಯಿ ದಾನದ ವಿಚಾರ

ಪವಮಾನ ಶಾಂತಿಗೆ-ಬೇಕಾಗುವ ತುಪ್ಪ

ಹೇಳಿಕೆ ಲಿಸ್ಟು, ಟಪಾಲು ಕಾಗದ-ಕಾಗದ-ಬಾಯಿ ಹೇಳಿಕೆ

ಅಡಿಗೆಯವರಿಗೆ-೧೧-೧೨-೧೩-೧೪ ಈ ದಿವಸದವರೆಗೆ ಮಾಡತಕ್ಕ ವಿಚಾರ ತಿಳಿಸಿ ಯಾವ ದಿವಸ ಸಂತರ್ಪಣೆ ಎಷ್ಟು ಅಡಿಗೆ ಜನಕ್ಕೆ ಹೇಳಿ, ನಂತರ ದಿನಸಿ ಪಟ್ಟಿ, ತರಕಾರಿ ಪಟ್ಟಿ ಮಾಡತಕ್ಕದ್ದು.

ಹೇಳಿಕೆ-೧೦ ನೇ ದಿವಸದ ಶಾಂಜಲಿ ಸ್ನಾನಕ್ಕೆ ಬರುವವರಿಗೆ ಸಮಯ ತಿಳಿಸಿ ಹೇಳಿಕೆ ಮಾಡತಕ್ಕದ್ದು. ದಾನಕ್ಕೆ ಜನ ಹೇಳತಕ್ಕದ್ದು.

ಬೇರೆಯವರಿಂದ ಅವಲಕ್ಕಿ ಮಾಡಿಸತಕ್ಕದ್ದು.

ಹಣ್ಣುಗಳು ಆಗುವ ಸಮಯವಾದರೆ, ಆಯಾಮ ಸಮಯಕ್ಕೆ ಸಿಗುವ ಹಣ್ಣುಗಳನ್ನು ಮುಂಚಿತವಾಗಿ ತರಿಸಿ ಏರ್ಪಾಡು ಮಾಡತಕ್ಕದ್ದು-ಹಲಸು-ಮಾವು-ಇಬ್ಬುಡ್ಲು-ಬಾಳೆಹಣ್ಣು-

10ನೇ ದಿವಸ ದಾನಕ್ಕೆ ಜನವನ್ನು ಮುಂದಾಗಿ ಆಲೋಚಿಸಿ ಹೇಳತಕ್ಕದ್ದು.



11ನೇ ದಿವಸ ವೃಷೋತ್ಸರ್ಗ ಹೋಮಕ್ಕೆ ಕರ್ಮಾಂಗ ಜನ ಎಷ್ಟು ಬೇಕೆಂದು ತಿಳಿದು ಕರ್ಮಾಂಗದವರಿಗೆ ಸಮಯ ತಿಳಿಸಿ ಹೇಳತಕ್ಕದ್ದು.

ಕರ್ಮಾಂಗಕ್ಕೆ ಮತ್ತು ದಾನಕ್ಕೆ ಪುರೋಹಿತರಿಂದ ತಿಳಿದು ಬೆಲ್ತಿಗೆ ಅಕ್ಕಿ ಗೇರಿಸಿ ಇಡುವುದು. ತೆಂಗಿನ ಕಾಯಿ ತರುವುದು.

ಸಪಿಂಡಿ ಮಾಡುವ ಜಾಗ ಮುಂಚೆ ನಿರ್ಣಯಿಸಿ ಒಲೆ ಇತ್ಯಾದಿ ಅನುಕೂಲತೆ ಮಾಡಿಕೊಳ್ಳತಕ್ಕದ್ದು.

12ನೇ ದಿವಸ ಮುಂಚೆ ಶ್ರವಣ ಆರಾಧನೆಗೆ ಲಿಸ್ಟು ಮಾಡಿಕೊಂಡು ಆ ದಿವಸ ಬದಲಾಯಿಸದಿದ್ದರೆ ಹೆಸರು ಬದಲಾಯಿಸಿ ಊಟವಾದ ನಂತರ ನಾಳೆ ಮಾಡುವ ಶ್ರವಣ ಆರಾಧನೆಗೆ ಹೇಳಿಕೆ ಮಾಡತಕ್ಕದ್ದು.

12ನೇ ದಿವಸ ಸಪಿಂಡಿ ಆದಿಯಿಂದ ಕೊನೆಯವರೆಗೆ ದಾನದ ಲಿಸ್ಟು ಮಾಡಿ-ದಿನ ಸೊತ್ತುಗಳ ಎದುರು; ಪುಣ್ಯಾಹ ಶುರುವಿನ ಒಳಗೆ ದಾನ ಹಿಡಿಯುವರ ಹೆಸರು ಬರೆಯತಕ್ಕದ್ದು. ಉಳಿದವರಿಗೆ ಹಣ್ಣುಗಳು ತಟ್ಟೆಗೆ ಹಾಕಿಕೊಡಬಹುದು.

ಬಳಗದ ಜವಳಿ ವೇಸ್ಟಿ ತರುವಾಗ ಯಜಮಾನನಿಗೆ ಬರುವ ಪಂಚೆ ಯೋಚಿಸಿ ಉಳಿದ ಪಂಚೆ ತರುವುದು ಒಳ್ಳೆಯದು.

11ರಿಂದ 14ರವರೆಗೆ ಪ್ರತಿ ದಿವಸ ಬೆಳಗಿನ ಕಾಫಿ ತಿಂಡಿ ಮಧ್ಯಾಹ್ನದ ಊಟ, ಸಯಂಕಾಲದ ಊಟ, ಫಲಹಾರ: ಆಯಾಯ ದಿವಸ ಸಮಯ ತಿಳಿಸಿ ಅಡಿಗೆಯವರಿಗೆ ಪಟ್ಟಿ ಕೊಡತಕ್ಕದ್ದು. ಅಡಿಕೆ ಮರದ ಹಾಳೆ ತರಿಸತಕ್ಕದ್ದು 11-12ನೇ ಕಾರ್ಯಕ್ಕೆ ದರ್ಭೆ-ಸಮಿಧ ತರಿಸತಕ್ಕದ್ದು

ಬಾಳೆಲೆ ಇತ್ಯಾದಿ ಯಾರಿಂದ ತರಿಸಬೇಕೋ? ಮುಂದಾಗಿ ಹೇಳಿ ಮಾಡಿಸಬೇಕು. 11ರಿಂದ ಬಾಳೆ ಹಣ್ಣು ನಿತ್ಯಬೇಕು ಅದಕ್ಕೆ ಅನುಕೂಲತೆ.

ಅಸ್ಥಿ ಸಂಚಯನ (ದಹನ ಮಾಡಿದಲ್ಲಿ ವೇದಿಕ ಆರಾಧನೆ) ನಂತರ ನಿತ್ಯವಿಧಿ

ತ್ರಿಪದಿ, ಧನಿಷ್ಠಾ ಪಂಚಕ ದೋಷ ಬಿಟ್ಟು ಮಾಡತಕ್ಕದ್ದು (ಚರು-ವೇದಿಕ ಆರಾಧನೆ ಮತ್ತು ನಿತ್ಯವಿಧಿಗೆ ಪ್ರತ್ಯೇಕ)

ಅಸ್ಥಿ ಹಾಕಲಿಕ್ಕೆ ಗಳಿನ ಅಂಡೆ ಅಥವಾ ಡಬ್ಬ ಇದಕ್ಕೆ ಮುಚ್ಚಲು.

ಅಸ್ಥಿಗೆ ಪಂಚರತ್ನ-ಗೋ ಕೇಸರಿ - ಹಸೆಚಾಪೆ-ಕಂಬಳಿ ಕರೆ-ಸುತ್ತಲಿ ದಾರ

ಬುಜಪತ್ರ

ಅಸ್ಥಿ ಹಾಕಲಿಕ್ಕೆ ಕೂಡ

ಹೆಡಿಗೆ (ಗೇರ್ಸಿ) ಹಾರೆ
ದೊನ್ನೆಗಳು
ಗೋಮೂತ್ರ-ಗೋಮಯ
ಹಾಲು-ಮೊಸರು-ತುಪ್ಪ

**ಹಾಳೆಯಿಂದ**

| | |
|---|---|
| ಪಾದುಕ ಜೊತೆ ೩ | ತುಳಸಿ-ಕರ್ಕೆ |
| ಬೀಸಣಿಗೆ ೩ | ಅತ್ತಿ ತುಂಡೆ |
| ಕೊಡೆ ೩ | ಎಳ್ಳು |
| ಪತಾಕೆ ೩ | ಶೀಯಾಳ ೨ |
| ಕೋಲುನೆಣೆ ೩ | ವಿಳ್ಯದೆಲೆ-ಅಡಕೆ ಹೋಳು |
| ಬೆಲ್ಲ- ಅರಿಶಿನ | ಬಾಳೆಹಣ್ಣು |
| ಬೆಂಕಿಪೆಟ್ಟಿಗೆ | |

**ನವಧಾನ್ಯ**

ಉದ್ದು-ಹೆಸರು-ಎಳ್ಳು-ಭತ್ತ
ಹೋಳಿಕೆ(ವೇದಿಕೆಗೆ ಹಾಕಲಿಕ್ಕೆ)
ಕೊಡಪಾನ ನೀರು
ಹೆಡಿಗೆ ಸಾಹಿತ್ಯ ಹಾಕಲಿಕ್ಕೆ
ಕತ್ತಿ-ಬಾಳೆ ಎಲೆ ಕಾಸಿದ್ದು
ಕಂಬಳಿ ಕರೆ
ಚರು-
ಅರಿಶಿನದಿಂದ ಹೋಳಿಕ ಭಕ್ಷ್ಯ
ಬೆಣಗಲ್ಲು
ದಾನಕ್ಕೆ ರೊಕ್ಕ
ತಂಬಿಗೆ - ಕವಳಿಗೆ ಸೌಟು
ಕಬ್ಬಿಣ-ಕ್ಕೆ ಕಟ್ಟಿದ ವಸ್ತ್ರ, ಶಿಲೆ
ಕಂಡ್ಲಂಗಡ್ಲೆ ಗುತ್ತಿ
ಅಸ್ಥಿ ಹಾಕಿದ ಕೊಡಕ್ಕೆ ಪಂಚರತ್ನ-ಇತ್ಯಾದಿ ಹಾಕಿ ಮುಚ್ಚಿ ಜಲ ಸಮೀಪ ಹುಗಿಯತಕ್ಕದ್ದು
ಬಾಳೆ ಎಲೆ
ದರ್ಭೆ



**ದಶದಾನ (ತಟ್ಟೆ) ಕ**

| | |
|---|---|
| 1. ಗೋವು | 6. ವಾಸ |
| 2. ಭೂಮಿ | 7. ಧಾನ್ಯ |
| 3. ತಿಲ | 8. ರೂಪ್ಯ |
| 4. ಹಿರಣ್ಯ | 9. ಲವಣ |
| 5. ಆಜ್ಯ | 10. ಗುಡ (ಬೆಲ್ಲ) |

1. ಉದುಕುಂಭ (ಪಾತ್ರೆ) ಶೀಯಾಳ
2. ಛತ್ರ
3. ಪಾದುಕೆ

**10ನೇ ದಿವಸ**

ನಿತ್ಯ ವಿಧಿ ಮಾಡಿ-ನಂತರ ವೇದಿಕ ಆರಾಧನೆ

ದಾನಕ್ಕೆ ಬ್ರಾಹ್ಮಣರಿಗೆ ಹೇಳತಕ್ಕದ್ದು-ಸಮಯ ತಿಳಿಸತಕ್ಕದ್ದು

ಚರು ಪ್ರತ್ಯೇಕ ಎರಡು ಕಡೆಗೆ ಬೇರೆ ಮಾಡಬೇಕು

ಸಾಹಿತ್ಯವನ್ನು ಹೆಡಿಗೆಯಲ್ಲಿ ಹಾಕಬೇಕು

ನಿತ್ಯವಿಧಿ ಸಾಹಿತ್ಯ-

ತಂಬಿಗೆ -ಕವಳಿಗೆ ಸೌಟು-ಶಸ್ತ್ರ(ಕಬ್ಬಿಣ) ಕ್ಕೆ ಕಟ್ಟಿದ ವಸ್ತ್ರ-ಶಿಲೆ

ಕಾಸಿದ ಬಾಳೆಲೆ
ದರ್ಭೆ
ಕರ್ಕೆ-ತುಳಸಿ
ದೊನ್ನೆ
ಹಾಲು-ಮೊಸರು, ತುಪ್ಪ

**ಹಾಳೆಯಿಂದ**

| | |
|---|---|
| ಕೊಡೆ ೩ | ತೆಂಗಿನೆಣ್ಣೆ (ಸ್ನಾನಕ್ಕೆ) |
| ಬೀಸಣಿಗೆ ೩ | ಎಳ್ಳು |
| ಪಾದುಕೆ ಜೊತೆ ೩ | ಬೆಂಕಿಪೆಟ್ಟಿಗೆ |
| ಕೋಲಿನೆಣೆ ೩ | ನವಧಾನ್ಯ(ವೇದಿಕೆಗೆ) |
| ಪತಾಕೆ ೩ | ದಶಧಾನ್ಯ ಸಾಹಿತ್ಯ |
| ಅರಿಶಿನ-ಬೆಲ್ಲ | ಉದುಕಂಭ ದಾನಕ್ಕೆ |

| | |
|---|---|
| ಬಾಳೆಹಣ್ಣು ೬ | ದಾನಕ್ಕೆ ರೊಕ್ಕ |
| ವಿಳ್ಯದೆಲೆ-ಅಡಕೆ | ಕಡ್ಲೆಂಗಡ್ಲೆ, ಗುತ್ತಿ |
| ಕತ್ತಿ ಹಾರೆ | ಶೀಲೆ |
| ತೆಂಗಿನ ಕಾಯಿ | |

ದಾನ

| | |
|---|---|
| 1. ಗೋವು | 6. ವಾಸ |
| 2. ಭೂಮಿ | 7. ಧಾನ್ಯ |
| 3.ತಿಲ | 8. ರೂಪಾಯಿ |
| 4. ಹಿರಣ್ಯ | 9. ಲವಣ |
| 5. ಆಜ್ಯ | 10. ಗುಡ |

1. ಉದಕುಂಭ (ಶೀಯಾಳ)
2. ಛತ್ರ
3. ಪಾದಕ

ವಾಪಸು ಬರುವಾಗ ಸ್ನಾನ ಮಾಡಿ ಕವಳಿಗೆ ಸೌಟಿನಲ್ಲಿ ನೀರು ಹಾಕಿಕೊಂಡು ಮಾವಿನ ತುಂಡೆ ಹಾಕಿತರತಕ್ಕದ್ದು. ಮೃತ ಪಟ್ಟ ಜಾಗದಲ್ಲಿ ಹೊಂಡ ಮಾಡಿ ಹೊಸ ಮಣ್ಣು ಅದಕ್ಕೆ ಹಾಕತಕ್ಕದ್ದು

೧೧. ದಿವಸ (ಚರು ಯಾವಾಗ ಎಷ್ಟು, ಎಂದು ನಿರ್ಣಯಿಸಬೇಕು) ಚರು ಪ್ರತ್ಯೇಕ ಪ್ರತ್ಯೇಕ ಮಾಡತಕ್ಕದ್ದು

(1) ವೃಷೋತ್ಸರ್ಗ ಹೋಮ(2) ಏಕ ಹಾಕುವುದು (3) ಷೋಡಷ.

| | |
|---|---|
| ಮಣೆಗಳು ೧೦ | ವಿಳ್ಯದೆಲೆ-ಅಡಕೆ ಹೋಳು |
| ಪುಣ್ಯಾಹ ಪಾತ್ರ | ಬೆಳ್ತಿಗೆ ಅಕ್ಕಿ |
| ಪಂಚಗವ್ಯಕ್ಕೆ | ತೆಂಗಿನ ಕಾಯಿ |
| ಕಂಚಿನ ಪಾತ್ರೆ | ಹೋಮದಲ್ಲಿ ಚರುಮಾಡಲಿಕ್ಕೆ ತಟ್ಟೆ |
| ಹರಿವಾಣಗಳು | ಉಪವೀತ ಗಂಟುಹಾಕುವುದು |
| ಬಾಳೆಲೆ-ಕತ್ತಿ-ಚೂರಿ | ದೊನ್ನೆ ೧೨ |
| ಹಲಸು, ಮಾವು ತುಂಡೆ | ಬಸವ-ಬಸವಿ-ಸ್ನಾನ ಮಾಡಿ ಬಿಡುವುದು |
| ಸೇಡಿ-ದರ್ಭೆ | ಹಿಟ್ಟಿನದ್ದಾದರೆ ಅಕ್ಕಿ ಹಿಟ್ಟು |
| ಗಂಧ - ತುಳಸಿ | ಎಳ್ಳು |
| ಕರ್ಕ-ವರ್ತೆ, ಸಮಿಧ ೫೦ | ಹಲಸಿನ ಚಕ್ಕೆ |



| | |
|---|---|
| ತುಂಬೆ, ಹೂ, ಇತರ ಹೂ | ತುಪ್ಪ ಸಿದ್ದೆ |
| ಪಂಚಗವ್ಯ ಸಾಹಿತ್ಯ | ಶೀಯಾಳ ೩ |
| ಪಂಚಾಮೃತ ಸಾಹಿತ್ಯ | ಕರ್ಮಾಂಗದ ಜವಳಿ |
| ಬಾಳೆಹಣ್ಣು-ಸಕ್ಕರೆ | ಡಿ-ಪಾತ್ರೆ |
| ರೊಕ್ಕ-ರೂಪಾಯಿ | ಕರ್ಮಾಂಗಕ್ಕೆ-ದಾನಕ್ಕೆ |
| ಏಕ ಹಾಕಲಿಕ್ಕೆ | ಕಾಸಿದ ಬಾಳೆ ಎಲೆ |
| ಷೋಡಶಕ್ಕೂ | ದೊನ್ನೆ |
| ಚರು ಮುಂದಾಗಿ ಕೊಡತಕ್ಕದ್ದು | |

ಕರ್ಮಾಂಗ

| | |
|---|---|
| ಪಂಚಗವ್ಯ | ರುದ್ರ ಪಾರಾಯಣ |
| ಪುಣ್ಯಾಹ | ರುದ್ರ ಸೂಕ್ತ ಪಾರಾಯಣ |
| ವೃಷೋತ್ಸರ್ಗ ಹೋಮ | ಪಟಾಲ ಮಂತ್ರ ಜಪ |
| ಕಲಶ ೩ | ಪೂಜಾ ಸ್ಥಾನ ೩ |
| ಬ್ರಹ್ಮತ್ವ | ಏಕಾದಶ ರುದ್ರ ೧೧ |
| ಗಂಟು ಅಕ್ಕಿ, ಕಾಯಿ | ಅಷ್ಟಮಾಪ್ತ ೧೮ |
| ರುದ್ರ - ಸೋಮ - ಇಂದ್ರ ೩ | |

ದಾನಾದಿಗಳು

1. ಹೋಮಾಂಗ ಕಲಶ ೩

ಡಿ–ದಾನ

| | |
|---|---|
| 1. ತಿಲ ೧ | ೪. ವಾಸ ೧ |
| 2. ಉದುಕುಂಭ ೧ | ೫. ಹಿರಣ್ಯ ೧ |
| 3. ಗೋವು ೧ | ೬. ಆಜ್ಯ ೧ |

ದಶದಾನ 10

ರುದ್ರ, ಸೋಮ, ಇಂದ್ರ ೩

ಏಕಾದಶ ರುದ್ರ ೧೯

ಅಷ್ಟಮಾಪ ೮

ದಾನಗಳು ೪೧

ತಿಲಾಷ್ಟ

1. ತಿಲ 5. ಲವಣ
2. ಲೋಹ 6. ಧಾನ್ಯ
3. ಹಿರಣ್ಯ 7. ಭೂ
4. ಕಪಾಕನ 8. ಕಾವ್ಯ

ಬ್ರಾಹ್ಮಣರಿಗೆ ಕರ್ಮಾಂಗ ಮತ್ತು ದಾನ ಮುಗಿದ ನಂತರ ಊಟದ ಸಾಹಿತ್ಯ, ಅಕ್ಕಿ, ಕಾಯಿ, ತರಕಾರಿ, ಶೀಯಾಳ, ದಕ್ಷಿಣೆ ಅನುಕೂಲವಿದ್ದದ್ದನು ಕೊಡಬಹುದು.

ಊಟಕ್ಕೆ ನಿಲ್ಲುವವರಿಗೆ ಹೇಳಿಕೆ ಹೇಳುವುದು.

ಇಲ್ಲಿ ಕರ್ಮಾಂಗ ಮುಗಿದ ನಂತರ ಅಡಿಗೆ ಪ್ರಾರಂಭ. ಅದ್ದರಿಂದ ಕರ್ಮಾಂಗ ಆದಷ್ಟು ಬೇಗ ಶುರು ಮಾಡುವುದು ಉತ್ತಮ.

ಏತ ಹಾಕುವಲ್ಲಿ-ಸಾಹಿತ್ಯ

ಅಕ್ಕಿ, ಕಾಯಿ, ವಿಳ್ಯದೆಲೆ, ಅಡಿಕೆಹೋಳು, ರೊಕ್ಕ
ಸನ್ತೋಷ್ಕರ ಗಂಟು ೧, ಮಣಿ ೧
ಹೋಮದ ಅಗ್ನಿ ಕೊಂಡು ಹೋಗಲಿಕ್ಕೆ ಪಾತ್ರೆ

ಹೆಡಿಗೆಯಲ್ಲಿ ಸಾಹಿತ್ಯ

ಶೀಯಾಳ
ತೆಂಗಿನ ಕಾಯಿ
ವಿಳ್ಯದೆಲೆ -ಅಡಿಕೆ ಹೋಳು
ಸೇಡಿ -ದರ್ಭೆ
ಚಕ್ಕೆ -ಬಾಳೆ ಎಲೆ -ಕತ್ತಿ
ತುಪ್ಪ -ಎಳ್ಳು -ಅಕ್ಷತೆಕಾಳು
ಚರು
ಹಾಲು -ಮೊಸರು -ತುಪ್ಪ
ಕರ್ಪ -ತುಳಸಿ -ಗಂಧ
ಬಾಳೆಹಣ್ಣು
ನಿತ್ಯವಿಧಿ ತಂಬಿಗೆ ಕವಳಿಗೆ ಸೌಟು
ರೊಕ್ಕ



ಶೋಡಶ ಜಾಗ ನಿಶ್ಚಯಿಸಿ ಶುದ್ಧ ಮಾಡತಕ್ಕದ್ದು

ಮಣಿ, ಶೇಡಿ, ದರ್ಭೆ, ಹಾಲು, ಮೊಸರು, ತುಪ್ಪ, ಜೇನುತುಪ್ಪ, ಬೆಲ್ಲ, ವಿಳ್ಯದೆಲೆ, ಅಡಿಕೆ ಹೋಳು, ಬಾಳೆಹಣ್ಣು, ಶೀಯಾಳ ೨

ಸ್ಥಾನ ಎಷ್ಟು ಎಂದು ನಿರ್ಣಯಿಸತಕ್ಕದು

(ಸ್ಥಾನ ೧೬-೮-೪-೨-೧)
ಸ್ಥಾನಕ್ಕೆ ಎಳ್ಳು, ಅಕ್ಕಿ, ಕಾಯಿ, ಪಂಚೆ, ಬಾಳೆ ಎಲೆ, ಚರು, ರೊಕ್ಕ, ಕವಳಿಗೆ ಸೌಟು-ತಂಬಿಗೆ
11ನೇ ದಿವಸ ಕಾರ್ಯಕ್ರಮವನ್ನು ಯಜಮಾನ ಮತ್ತು ಪುರೋಹಿತ ಮತ್ತು ಬಂಧಗಳು ಕೂಡಿ ಯಾವ ರೀತಿಯಲ್ಲಿ ಮಾಡಿದರೆ ಸಾಕು ಎನ್ನುವುದು ನಿರ್ಣಯಿಸತಕ್ಕದ್ದು. ದಾನಾದಿಗಳನ್ನು ಬಿಡಬಹುದು. ನಿರ್ಣಾಮ ದಾನವನ್ನು ಮಾಡಬಹುದು.

12ನೇ ದಿವಸಕ್ಕೆ ಮನೆಯವರು ಯೋಚಿಸತಕ್ಕ ವಿಷಯ

ಬ್ರಾಹ್ಮಣ ಸಂತರ್ಪಣೆ ಎಷ್ಟು ಗಂಟೆಗೆ ಆಗಬೇಕೆಂದು ನಿರ್ಣಯಿಸಿ ಇದಕ್ಕೆ ಸಪಿಂಡಿ ಪುಣ್ಯಹದಲ್ಲಿ ದಾನ, ಇದಕ್ಕೆ ಎಷ್ಟು ಸಮಯ ಬೇಕು ಎಂದು ಪುರೋಹಿತರಿಂದ ತಿಳಿದು ಎಷ್ಟು ಘಂಟೆಗೆ ಶುರು ಮಾಡಿದರೆ ಸಾಯಾಗುತ್ತದೆ ಎಂದು ಲೆಕ್ಕ ಹಾಕಿ, ಆ ಸಮಯಕ್ಕೆ ಬರಲಿಕ್ಕೆ ನಿರ್ದಾಕ್ಷಿಣ್ಯವಾಗಿ ಹೇಳತಕ್ಕದ್ದು. ಸಪಿಂಡಿಯಲ್ಲಿ ಕೈ ಕುಮ್ಮಿಗೆ ಕರ್ಮಾಂಗ ಗೊತ್ತಿರುವವರನ್ನು ಹಾಕಿಕೊಳ್ಳತಕ್ಕದ್ದು.

ಇವರಿಬ್ಬರಿಗೆ ಮುಂಚಿನ ದಿವಸ ತಿಳಿಸಿ ಸಮಯ ಹೇಳತಕ್ಕದ್ದು. ಕಬ್ಬಿನ ಕೋಲು ತರಿಸುವುದು(ಮಾರಣೆ ದಿವಸ ನಾವೆಗೆ)

12ನೇ ದಿವಸ

ಸಪಿಂಡಿ ಬೆಳಗ್ಗೆ 7 ಘಂಟೆಗೆ ಶುರು ಮಾಡಿದರೆ 11 ಘಂಟೆಗೆ ಮುಗಿಯುತ್ತದೆ. 1 ಘಂಟೆ ಸಮಯ ಸ್ನಾನದಿಪ ಪುಣ್ಯಾಹ ಶುರುವಿಗೆ ಬೇಕು. 12ಕ್ಕೆ ಶುರು ಮಾಡಿದರೆ 2–30ಕ್ಕೆ ಮುಗಿಯಬಹುದು. ಇದನ್ನು ಯಜಮಾನ ಮತ್ತು ಪುರೋಹಿತರು ಆಲೋಚಿಸಿ ಕಾರ್ಯ ಆರಂಭದ ಸಮಯ ನಿಶ್ಚಯಿಸತಕ್ಕದ್ದು.

ಸಪಿಂಡಿ ಮಾಡುವ ಸ್ಥಳವನ್ನು ಮುಂಚಿನ ದಿವಸ ಶುದ್ಧ ಮಾಡಿ ಕಟ್ಟಿಗೆ, ತರಕಾರಿ, ಪಾತ್ರೆಗಳು, ದಿಬು, ಹೆರಮಣೆ, ಮೆಟ್ಟು ಕತ್ತಿ, ಹಣ್ಣುಗಳು ಇತ್ಯಾದಿ ಸಂಗ್ರಹಿಸಿ ಇಡತಕ್ಕದ್ದು. ಬೆಳಗ್ಗೆ 5–30 ಘಂಟೆಗೆ ಸ್ನಾನ ಮಾಡಿ ಸಪಿಂಡಿ ಅಡಿಗೆಗೆ ಇಬ್ಬರು ಶುರು ಮಾಡತಕ್ಕದ್ದು.

ಕೈ ಕುಮ್ಮಿ ಜನ-ಬಾಳೆ ಎಲೆ-ದೊನ್ನೆ ಎಷ್ಟು ಬೇಕೆಂದು ನಿರ್ಣಯಿಸಿ, ಮುಂಚಿನ ದಿವಸ ತೆಗೆದಿಟ್ಟು ಚೂರಿ, ಕತ್ತಿಯನ್ನು ತೆಗೆದಿರಿಸಿಕೊಂಡು ಬೆಳಗಿನ ಜಾವ 5 ಘಂಟೆಗೆ ಎದ್ದು ಬಾಳೆಲೆ ಕಾಸಿ, ಸ್ನಾನ ಮಾಡಿ, ದೊನ್ನೆ, ದರ್ಭೆ, ಅನುಕೂಲತೆ ಮಾಡತಕ್ಕದ್ದು, ಸಪಿಂಡಿ ಮಾಡುವ ಸ್ಥಳಕ್ಕೆ ಅಲ್ಲಿಗೆ ಬೇಕಾಗುವ ಸಾಹಿತ್ಯ ಹೇಳಿ ತರಿಸತಕ್ಕದ್ದು.

ಗೋವನ್ನು , ದನ-ಕರುವನ್ನು ಸ್ನಾನ ಮಾಡಲಿಕ್ಕೆ ಹೇಳುವುದು

ದನಕರು - ಪೂಜಾಕಾಲದ ಸಾಹಿತ್ಯ ಒಟ್ಟು ಹಾಕಿ-ಹಾವಿನ ಮಾಲೆ -ಕಬ್ಬಿನ ನಾವೆ ಮಾಡಲಿಕ್ಕೆ ಹೇಳುವುದು.

ಬಂದವರಿಗೆ ಕಾಫಿ ತಿಂಡಿ ನಂತರ ಶರಬತ್ತು(ಪಾನಕ) ವಿಚಾರಣೆ-ಮೇಲು ವಿಚಾರಣೆ ಜನ

ದಾನದಲ್ಲಿ ಪಟ್ಟಿಗೆ, ಜನ ಬಂದ ಹಾಗೆ, ಬರೆದುಕೊಳ್ಳುವ ಜನರ ಪರಿಚಯವಿರುವ ಜನ, ಹೊರಗಡೆಯಿದ್ದು ಹೆಸರು ಬರೆದುಕೊಳ್ಳುವುದು, ಯಜ್ಞೋಪವೀತ ಗಂಟು ಹಾಕಿ, ಪುಣ್ಯಾಹಕ್ಕೆ ತಯಾರು ಮಾಡಿ, ದಾನದ ಸಾಹಿತ್ಯ ಅನುಕೂಲತೆ ಮಾಡಿ, ದೊಡ್ಡ ಹರಿವಾಣದಲ್ಲಿ ವೇಸ್ಟಿ-ಸೀರೆ ಅರಿಶಿನ, ಕುಂಕುಮ, ಹೂ ಹಾಕಿ ಇಡುವುದು, ಅಕ್ಷತೆ -ಕಾಳು ಕಲಸುವದು, ಅಕ್ಷತೆ ಮಾಡುವುದು, ಮೃತಪಟ್ಟ ಜಾಗದಲ್ಲಿ ಪುಣ್ಯಾಹ ಮಾಡುವ ಸಂಪ್ರದಾಯ. ಪಾತಾಯಿ ದಾನದಲ್ಲಿ ಶ್ರಾದ್ಧಕ್ಕೆ ಅಕ್ಕಿ ಹಿಟ್ಟು ಬೇಕಾಗುವದರಿಂದ ಅಕ್ಕಿ ಬೀಸಿ ಹಿಟ್ಟು ಮಾಡಿಕೊಳ್ಳತಕ್ಕದ್ದು.

ಊಟದ ಬಾಳೆ ಎಲೆ ಸೆಕ್ಕೆ ದಿವಸಕ್ಕೆ ಮಾಡಿ ಈ ದಿವಸ ವರೆಸಿ ಇಡುವುದು. ಪವಮಾನ ಶಾಂತಿ13-14ಕ್ಕೆ ಯಾವ ದಿವಸ ಎಂದು ನಿಶ್ಚಯಿಸತಕ್ಕದ್ದು.

ಸಪಿಂಡಿಯಲ್ಲಿ (ಅನುಕೂಲವಿದ್ದಲ್ಲಿ ಪಿಂಡ ಭೇದನಕ್ಕೆ ಚಿನ್ನದ ಸರಿಗೆ)

ಮಣೆ
ಸೇಡಿ - ದರ್ಭೆ
ಕರ್ಕೆ - ತುಳಸಿ - ಗಂಧ
ಅತ್ತಿ ಸಮಿಧ - ಎಲೆ
ಅಡಿಕೆ ಹೋಳು - ವಿಳ್ಯದೆಲೆ
ಬಾಳೆಹಣ್ಣು
ತುಪ್ಪ - ಜೇನು ತುಪ್ಪ
ಹಾಲು, ಮೊಸರು-ಬೆಲ್ಲ
ಎಳ್ಳು - ಅಕ್ಕಿ
ಭೃಂಗರಾಜ
ದೊನ್ನೆ
ಕಾಸಿದ ಬಾಳೆಲೆ
ಬಾಳೆ ಎಲೆ
ಅಕ್ಕಿ
ಕಾಯಿ ಪಂಚೆ
ಪ್ರೇತಸ್ನಾನಕ್ಕೆ ಕಂಚಿನ ಪಾತ್ರೆ-ಕವಳಿಗೆ ಸೌಟು



ಒಂದೆಲೆ ದೊನ್ನೆ
ಕೃಚ್ಛ
ಯಜ್ಞೋಪವೀತ
ಪಿಂಡಕ್ಕೆ ಮುಚ್ಚುವ ವಸ್ತ್ರ
ರೊಕ್ಕ

ದಾನದ ಸಾಹಿತ್ಯ

ಗೋವು, ಪೂಜಾಸಾಹಿತ್ಯ, ಹೂವಿನ ಮಾಲೆ, ಪಂಚೆ, ಅರಿಶಿನ, ಕುಂಕುಮ, ನೈವೇದ್ಯಕ್ಕೆ, ಅಕ್ಕಿ, ಬಾಳೆಹಣ್ಣು, ವಿಳ್ಯದೆಲೆ, ತೆಂಗಿನಕಾಯಿ, ಪಾತ್ರೆ.

ಅನ್ನಸ್ಥಾಲಿ
ಹಿರಣ್ಯ ಸಹಸ್ರಸಾಂ
ಉದುಕುಂಭ
ನಾವೆ
ದೇವರು ೧, ಸ್ಥಾನ
ಅಕ್ಕಿ, ಕಾಯಿ, ಪಂಜಿ

ಪಿಂಡಕಾರ್ಯಕ್ರಮ ಮುಗಿದ ನಂತರ, ಪಿಂಡಕ್ಕೆ ಮುಚ್ಚಿದ ವಸ್ತ್ರದಲ್ಲಿ ಅಥವಾ ಪಾತ್ರೆಯಲ್ಲಿ ಇಟ್ಟುಕೊಂಡು ಹೊರಗೆ ಹೋಗುವಾಗ ಸೋದರ ಮಾವ ಅವರ ತಲೆಗೆ ಎಣ್ಣೆ ಹಾಕತಕ್ಕದ್ದು. ಆದ್ದರಿಂದ ಮುಂಚಿತವಾಗಿ ಎಣ್ಣೆ ಪಾತ್ರೆ ಅಲ್ಲೆ ಇಟ್ಟುಕೊಳ್ಳತಕ್ಕದ್ದು.

ಪುರೋಹಿತರು ಯಜಮಾನರು ಬರುವುದರೊಳಗೆ ಪುಣ್ಯಾಹಕ್ಕೆ ತಯಾರು ಮಾಡಲಿಕ್ಕೆ ಬಂದ ಬ್ರಾಹ್ಮಣರಲ್ಲಿ ಪುರೋಹಿತರು ಹೇಳಿ ಹೋಗತಕ್ಕದ್ದು. ಅಕ್ಷತೆ ಕಲಿಸತಕ್ಕದ್ದು.

12ನೇ ದಿವಸ ಪುಣ್ಯಾಹದಲ್ಲಿ ಪುಣ್ಯಾಹ ಸಂಪ್ರದಾಯ ಮೃತಪಟ್ಟ ಸ್ಥಳ

ಸೇಡಿ-ದರ್ಭೆ — ಸಕ್ಕರೆ-ಬಾಳೆಹಣ್ಣು
ತುಳಸಿ-ಗಂಧ-ಅಕ್ಷತೆ — ವಿಳ್ಯದೆಲೆ-ಅಡಿಕೆಹೋಳು
ಅರಶಿನ-ಕುಂಕುಮ — ಪುಣ್ಯಾಹ ಪಾತ್ರೆ
ಅಕ್ಷತೆಕಾಳು — ಹರಿವಾಣ
ಹೂವು — ಕವಳಿಗೆ ಸೌಟು
ಮಣೆ — ಬೆಳ್ತಿಗೆ ಅಕ್ಕಿತೆಂಗಿನ ಕಾಯಿ
ಹಲಸು-ಮಾವಿನ ಕುಂಡೆ — ದಾನಕ್ಕೆ ರೊಕ್ಕ-ರೂಪಾಯಿ
ವಿಭೂತಿ — ತಂಬಿಗೆ ನೀರು
ಯಜ್ಞೋಪವಿತ ಗಂಟು ಹಾಕಿದ್ದು

ಬಳಗದ ಜವಳಿ ದೊಡ್ಡ ಹರಿವಾಣದಲ್ಲಿ ಒಂದು ಭಾಗದಲ್ಲಿ ಪೆಸ್ಟಿ-ಒಂದು ಭಾಗದಲ್ಲಿ ಸೀರೆಯುಟ್ಟು-ಮೇಲೆ ಅರಿಶಿನ-ಕುಂಕುಮ, ಹೂ-ವಿಳ್ಳದೆಲೆ ಪಟ್ಟಿಯಿಡತಕ್ಕದ್ದು. ಅಕ್ಷತೆ ಬಟ್ಟು ಸಹಿತ.

ದಾನದ ಸಾಹಿತ್ಯ
ಆಚಾರಿ ಪೂಜಾ ಸಾಹಿತ್ಯ
ಗರುಡ ಪುರಾಣ ಹೇಳಿದವರಿಗೆ ಪೂಜಾ ಸಾಹಿತ್ಯ
ಬಳಗದ ಜವಳಿ
ಕಲ್ಲಾರತಿಗೆ ತಯಾರು ಮಾಡಿಕೊಳ್ಳುವುದು

### ದಾನದ ಸಾಹಿತ್ಯ ದಶದಾನ

1. ಗೋವು-ಪುರೋಹಿತ
2. ಭೂ
3. ತಿಲ
4. ಹಿರಣ್ಯ
5. ಆಜ್ಯ
6. ವಾಸ
7. ಧಾನ್ಯ
8. ರೌಪ್ಯ
9. ಲವಣ
10. ಗುಡ

ದಾನ ಕಮ್ಮಿಯಾದಲ್ಲಿ ಹಿಂದಿನ ಪುಟದಲ್ಲಿ ತಿಲಾದ್ಯಷ್ಟ ದಾನ ಮಾಡಬಹುದು

### ಚತುಷ್ಪದ ದಾನ

1. ಅನ್ನಂಚ
2. ಉದುಕುಂಭ
3. ಉಪಾನ
4. ಕಮಂಡಲ
5. ಛತ್ರಿ
6. ವಸ್ತ್ರ
7. ಜಲ್ಲು
8. ಕಬ್ಬಿಣದ ಜಲ್ಲು
9. ಬೆಂಕಿ ಕೆಂಡ (ಅಗ್ನಿಷ್ಟಿಕ)
10. ದೀಪ
11. ತಿಲ
12. ತಾಂಬೂಲ
13. ಶ್ರೀಗಂಧ
14. ಪುಷ್ಪ

1. ಅಂಧತ್ವ-ದೀಪ
2. ಮೂಕತ್ವ-ಪುಸ್ತಕ
3. ಬದಿರತ್ವ-ಗಂಟೆ
4. ಪೈಶಾಚತ್ವ-ದೇವರು

1. ಗುಪ್ತದಾನ
2. ರುದ್ರಾಕ್ಷಿ
3. ಪಟ್ಟೆ



1. ಶಯ್ಯಾದಾನ
2. ಆವೇಶಣ ಆಜ್ಯ

ಊಳಿದವರಿಗೆ ತಾಂಬೂಲ, ಪುಷ್ಪ, ಹಣ್ಣು ದಾನ ಕೊಡತಕ್ಕದ್ದು.

ಅಥವಾ ತಿಲಾದ್ಯಷ್ಟ ದಾನ ಮತ್ತು ಅಮಾನತ್ರಯ ಕೃಚ್ಛದಾನ ಮಾಡಬಹುದು.

ದಾನ ಮುಗಿದ ನಂತರ ಬಳಗದವರು ಜವಳಿ ಹಾಕುತ್ತಾರೆ.

ಅಂದರೆ ಹೊಸ ವಸ್ತ್ರ ಉಟ್ಟುಕೊಂಡು ಬಂದ ನಂತರ ಅಕ್ಷತೆ ಇಡಿಸಿ ವಿಳ್ಳದಲೆ ಮುತ್ತೈದೆಯರು ಕೊಟ್ಟ ನಂತರ ಬಳಗದ ಜವಳಿ, ಕಲ್ಲು ಆರತಿ.

ಆರಾಧನೆ-ಹಸ್ತೋದಕ-ದಕ್ಷಿಣೆ-ಉಪಚಾರ

ತದನಂತರ ಸಭೆ ಮಂತ್ರಾಕ್ಷತೆ

ಇಷ್ಟರ ಒಳಗೆ ನಾಳೆ ಶ್ರವಣ ಆರಾಧನೆಗೆ ಪಟ್ಟಿ ಮಾಡಿ ಬರೆದುಕೊಂಡು, ಅವರಿಗೆ ಸಮಯ ತಿಳಿಸಿ ಹೇಳಿಕೆ ಹೇಳತಕ್ಕದ್ದು, ಬ್ರಾಹ್ಮಣರನ್ನು ಯಾಜಮಾನನೇ ಯಾರು ಎಂದು ಹೆಸರು ಬರೆಸುವದು ಉತ್ತಮ.

ಪಥ್ಯ ದಾನಕ್ಕೂ-ಶ್ರಾದ್ಧಕ್ಕೂ-ಸಮಯ ತಿಳಿಸಿ ಹೇಳತಕ್ಕದ್ದು.

13-14 ಪವಮಾನ ಶಾಂತಿಗೆ ಕರ್ಮಾಂಗ ಜನ ನೋಡಿ ಹೇಳಿಕೆ ಹೇಳಿ ಆರಂಭದ ಸಮಯ ತಿಳಿಸತಕ್ಕದ್ದು.

### 12ನೇ ದಿವಸ ರಾತ್ರಿ ಬೆಳಗಿನ ಜಾವ

ಪಥ್ಯ ಶ್ರಾದ್ಧಶೇಡಿ, ದರ್ಭೆ, ಎಳ್ಳು, ಅಕ್ಕಿ, ಅಕ್ಷತೆಕಾಳು, ಗಂಧ, ತುಳಸಿ, ವಿಳ್ಳದೆಲೆ, ಅಡಿಕೆ, ಬಾಳೆಹಣ್ಣು, ಹಾಲು, ಮೊಸರು, ತುಪ್ಪ, ಮಣೆ, ತಂಬಿಗೆ, ಕವಳಿಗೆ ಸೌಟು, ಅಕ್ಕಿಹಿಟ್ಟು, ಬಾಳೆ ಎಲೆ, ರೊಕ್ಕ, ದಕ್ಷಿಣೆ, ಜಾಗ ನಿಶ್ಚಯಿಸಿ ಶುದ್ಧಮಾಡಿ ಇಟ್ಟುಕೊಳ್ಳತಕ್ಕದ್ದು.

ದಾನದಲ್ಲಿ ಗಂಟು ಅವರವರ ಶಕ್ತ್ಯಾನುಸಾರ ಸಸೋಪಸ್ಕರ ಅಕ್ಕಿ, ಕಾಯಿ, ರೂಪಾಯಿ, ವಿಳ್ಳದೆಲೆ ಹಾಕಿ ಗಂಟು ಮಾಡತಕ್ಕದ್ದು ಅಥವಾ ಇಷ್ಟ ಬಂದಷ್ಟು ಕೊಡಬಹುದು. ಇನ್ನು ದೀಪ, ನೀರಿಗೆ ಪಾತ್ರೆ ಕೊಡತಕ್ಕದ್ದು.

ಸಮಯ ಸ್ನಾನ ಆದಿಯಿಂದ ಅಂತ್ಯದವರೆಗೆ ಸ್ಯೆ.ಪು. 2 ಬೇಕಾಗುತ್ತದೆ. ಸೂರ್ಯೋದಯ ಸಮಯ ನೋಡಿ ಪೂರ್ವ ಕಾರ್ಯ ಆರಂಭ ಮಾಡತಕ್ಕದ್ದು. ಪುರೋಹಿತರಿಗೆ ಕಾಫಿ ತಿಂಡಿಕೊಟ್ಟು ಕಳುಹಿಸತಕ್ಕದ್ದು.

ಸಂಬಂಧ ಪಟ್ಟವರು ಮಂತ್ರಾಕ್ಷತೆಗೆ ಬರತಕ್ಕದ್ದು. ಯಜಮಾನನ ಪತ್ನಿ ಪ್ರಸಾದಕ್ಕೆ ಬರತಕ್ಕದ್ದು.

## 13ನೇ ದಿವಸ ಶ್ರವಣ ಆರಾಧನೆ

ಬಾಳೆ ಎಲೆ ಹಾಕಿ, ಎಲೆ ಎದುರು ಮಾಡುವುದಕ್ಕಿಂತ ಮುಂಚೆ ಮಾಡುವುದು ಉತ್ತಮ. ಇನ್ನು, ಬ್ರಾಹ್ಮಣರು ಬಂದು ಆರಾಧನೆ ತ್ಪೂರ್ವ ಕೇಶವಾದಿ 13 ಹೆಸರು ಬರೆದು ವಿದ್ಯಾವಂತರಾದಿಯಾಗಿ ಕೊಡುತ್ತ ಬರುವುದು. ಆರಾಧನೆ ಸಮಯಕ್ಕೆ ಅವರಾಗಿ ಬರುತ್ತಾರೆ. ಇವರಿಗೆ ಊಟದ ಸ್ಥಳ ಪ್ರತ್ಯೇಕ ಮಾಡಿ ಅನುಭವಸ್ತರನ್ನು ಬಳಸಲಿಕ್ಕೆ ಕಳುಹಿಸಬೇಕು. ಆರಾಧನೆ ಸಾಹಿತ್ಯ ಪಂಚೆ, ಕವಳಿಗೆ ಸೌಟು, ಯಜ್ಞೋಪವೀತ, ತೆಂಗಿನಕಾಯಿ, ವಿಳ್ಯದೆಲೆ ಪಟ್ಟಿ, ತಂದು ಆರಾಧನೆ ಮಾಡುವ ಸ್ಥಳದಲ್ಲಿ ಇಟ್ಟುಕೊಳ್ಳುವುದು. ದಕ್ಷಿಣೆ ಮುಂಚೆ ಎಷ್ಟು ಕೊಡುವುದು ಎಂದು ನಿಶ್ಚಯಿಸತಕ್ಕದ್ದು. ಆರಾಧನೆ ಮುಂಚೆ ಮಾಡಿಕೊಳ್ಳುವುದು. ಉತ್ತಮ.

| | |
|---|---|
| ಸಾಹಿತ್ಯ-ಮಣೆ ೧೩ | ಕಾಲುದೀಪ |
| ಪದಾರ್ಚನೆಗೆ ಹರಿವಾಣ | ಧೂಪ-ದೀಪಕ್ಕೆ ಅನುಕೂಲತೆ |
| ಈ ನೀರು ಹಾಕಲಿಕ್ಕೆ ಪಾತ್ರೆ | ಜೊತೆ ಪಂಚೆ |
| ಕಾಲುವರಿಸಲಿಕ್ಕೆ ವಸ್ತ್ರ | ಜೊತೆ ಯಜ್ಞೋಪವಿತ |
| ಕೊಡಪಾನ ನೀರು | ಕವಳಿಗೆ ಸೌಟು |
| ತಂಬಿಗೆ-ಕವಳಿಗೆ ಸೌಟು | ತೆಂಗಿನ ಕಾಯಿ |
| ಹೂ-ಗಂಧ-ಅಕ್ಷತೆ-ತುಳಸಿ | ವಿಳ್ಯದೆಲೆ-ಪಟ್ಟಿ |
| ಅಕ್ಷತೆ ಕಾಳು | ದಕ್ಷಿಣೆ |

| | |
|---|---|
| 1. ಕೇಶವ | 8. ವಾಮನಾಯ |
| 2. ನಾರಾಯಣ | 9. ಶ್ರೀಧರಾಯ |
| 3. ಮಾಧವ | 10. ಹೃಷಿಕೇಶಾಯ |
| 4. ಗೋವಿಂದ | 11. ಪದ್ಮನಾಭ |
| 5. ವಿಷ್ಣುವೆ | 12. ದಾಮೋದರಾಯ |
| 6. ಮಧುಸೂಧನ | 13. ಮಹಾವಿಷ್ಣು |
| 7. ತ್ರಿವಿಕ್ರಮಾಯ | |

ಚೆಲ್ಲಿದ ನೀರು ವರೆಸಲಿಕ್ಕೆ ಅರಿವೆ ೧
ಬೆಂಕಿಪೆಟ್ಟಿಗೆ
ಊದುಬತ್ತಿ ೧೩
ದರ್ಭೆ

ಎರಡು ಕಡೆ ಸಂತರ್ಪಣೆ ಅದ ನಂತರ ಸಭೆ ಮಂತ್ರಾಕ್ಷತೆ



## 14ನೇ ದಿವಸಕ್ಕೆ

ಪವಮಾನ ಶಾಂತಿಗೆ ಕರ್ಮಾಂಗ ಜನ ಯಾರು ಎಂದು ನಿಶ್ಚಯಿಸಿ ಆರಂಭದ ಸಮಯ ತಿಳಿಸಿ ಹೇಳತಕ್ಕದ್ದು.

ಎಷ್ಟು ಜನ ಬೇಕು ಎಂದು ನಿರ್ಣಯ ಮಾಡಿಕೊಂಡು ಹೇಳತಕ್ಕದ್ದು. ಕರ್ಮಾಂಗದ ಆದಿಯಿಂದ ಅಂತ್ಯದವರೆಗೆ ಸ್ವೈ. ಪು. ೩ ಸಮಯಬೇಕು.

## ೧೪ನೇ ದಿವಸ ಪವಮಾನ ಶಾಂತಿ

| | | |
|---|---|---|
| ಹಲಸು | -ಮಾವುತುಂಡೆ | ಹಲಸಿನ ಚಕ್ಕೆ |
| ಕೇದಿ | - ದರ್ಭೆ | ಹಂಬೆ ದಿಂಡು |
| ಅರಿಶಿನ | -ಕುಂಕುಮ | |
| ಹಂಬು | ಹೊಯಿಗೆ | ಕಲಶಕ್ಕೆ ಪಾತ್ರೆ |
| ಹೂ | -ಗಂಧ-ತುಳಸಿ | ಪುಣ್ಯಾಹ ಪಾತ್ರೆ |
| ಪಂಚಾಮೃತ ಸಾಹಿತ್ಯ | | ಆಜ್ಯ ಸ್ಥಾಲಿ |
| ಕಲಶದ ಹುಂಡಿ | | ಪ್ರಣೀತ ಪಾತ್ರೆ |
| ಶೀಯಾಳ | | ಹರಿವಾಣಗಳು |
| ವಿಳ್ಯದೆಲೆ | -ಅಡಿಕೆ ಹೋಳು | ದೆಳ್ತಿಗೆ ಅಕ್ಕಿ |
| ಸಕ್ಕರೆ | -ಬಾಳೆಹಣ್ಣು | ತೆಂಗಿನ ಕಾಯಿ |
| ಊದುಬತ್ತಿ | -ಕರ್ಪೂರ | ಪಂಚೆ |
| ಪೂಜಾಸಾಹಿತ್ಯ | - ಘಂಟೆ-ಆರತಿ-ದೀಪ | ತುಪ್ಪ ಸಿದ್ಧಿ ೮ |
| ಹಣ್ಣು ಕಾಯಿ, ಸಾಹಿತ್ಯ | | |
| ಮಣೆ | | |

ಪೂಜಾಸ್ಥಾನದಲ್ಲಿ ತಟ್ಟೆಯಲ್ಲಿ ಹಾಕಿ
ಕ್ಷೀರ-ಸ್ವಾರ್ವಿ-ಮಧು-ಉದಕ-ಇಡತಕ್ಕದ್ದು
ರೊಕ್ಕ-ದಕ್ಷಿಣೆ

ಕರ್ಮಾಂಗ ಪುಣ್ಯಾಹ

1. ಆಚಾರ್ಯ
2. ಬ್ರಹ್ಮ
3. ಕಲಶ
4. ಆನುಕ್ರಮಣಿಕೆ

5. ಪಾರಾಯಣ
6. ಉದ್ದೇಶ ತ್ಯಾಗ

ದಾನ

1. ಪಾತ್ರೆ ಸಹಿತ ಕಲಶದಾನ
2. ಕ್ಷೀರ
3. ತುಪ್ಪ
4. ಮಧು
5. ಉದಕ

ಕರ್ಮಾಂಗದ ದಕ್ಷಿಣೆ

14ನೇ ದಿವಸ ಸಂತರ್ಪಣೆಯಲ್ಲಿ ವೈದಿಕರು ಹೊಸದಾಗಿ ಬಂದವರು ಇದ್ದರೆ ದಾನ ಕೊಡಬಹುದು.

ಊಟದಲ್ಲಿ ಚಿತ್ರ ಗುಪ್ತದಾನ, ಬೇರೆಯಾದ ಸಂಕಲ್ಪ ಮಾಡಿ ಕೊಡಬಹುದು. ಇಲ್ಲವಾದರೆ ಸಂತರ್ಪಣೆ ಆರಾಧನೆ ಮಾಡಿ ಅಲ್ಲಿ ಕೊಡಬಹುದು. ದಾನ ಇಷ್ಟವಿದ್ದರೆ ಹೆಚ್ಚಿಗೆ ಹೊಸದಾಗಿ ಬಂದವರಿಗೆ ಕೊಡಬಹುದು.

ಆರಾಧನೆ ಸಾಹಿತ್ಯ

| | |
|---|---|
| ಹರಿವಾಣ | -ಕವಳಿಗೆ ಸೌಟು |
| ಅಕ್ಷತೆ ಕಾಳು | |
| ಗಂಧ | -ಅಕ್ಷತೆ |
| ಹೂ | -ರೊಕ್ಕ |

1. ಚಿತ್ರಾನ್ನ
2. ಘೃತಾನ್ನ
3. ದಧ್ಯಾನ್ನ
4. ಪರಮಾನ್ನ
5. ಭಕ್ಷ

ಆರಾಧನಾ ಪೂರ್ವಕ ಹಸ್ತೋದಕ, ಗೊಗ್ರಾಸ-ಸಂತರ್ಪಣೆ-ದಕ್ಷಿಣೆ

ಸಭೆ

ಊದುಬತ್ತಿ-ವಿಳ್ಯ
ಮಂತ್ರಾಕ್ಷತೆ



ಬ್ರಾಹ್ಮಣರಿಗೆ ಉಪಚಾರ, ಆದರ, ಆತಿಥ್ಯ ಪೂರ್ವಕ, ಮೃತರ ಆತ್ಮಕ್ಕೆ ಸದ್ಗತಿ ಸುಖಃ ಶಾಂತಿ ಸಿಗುವ ಹಾಗೆ ಮತ್ತು ಆದಿಯಿಂದ ಅಂತ್ಯದವರೆಗೆ ಅನಾನುಕೂಲತೆಯಿಂದಾಗಲಿ ಅಜಾಗರೂಕತೆಯಿಂದಾಗಲಿ ನ್ಯೂನ್ಯತೆಯಿದ್ದರೂ ಕೂಡ ಆರಾಧನೆ ದೇವರು ಸಂಪ್ರೀತರಾಗಿ ತಪ್ಪುಗಳನ್ನು ಮನ್ನಿಸಿ, ಮೃತ ಆತ್ಮಕ್ಕೆ ತೃಪ್ತಿ ಆಗುವ ಹಾಗೂ ನಮಗೆಲ್ಲರಿಗೂ ಶ್ರೇಯಸ್ಸು ಆಗುವ ಹಾಗೂ ಶ್ರೀ ದೇವರನ್ನು ಪ್ರಾರ್ಥಿಸಿಕೊಂಡು ಆಶೀರ್ವದಿಸಬೇಕಾಗಿ ಕೇಳಿಕೊಳ್ಳುವವನಾಗಿದ್ದೇನೆ.

ಬ್ರಾಹ್ಮಣ ಆಶೀರ್ವಾದದ ನಂತರ ಮಂತ್ರಾಕ್ಷತೆ, ಸಂಬಂಧಪಟ್ಟವರನ್ನು, ಹಿರಿಯರನ್ನು ಮಂತ್ರಾಕ್ಷತೆಗೆ ಕಳುಹಿಸುವುದು.

ಯಜಮಾನ ಪುರೋಹಿತರಿಗೆ ವಿಳ್ಯಕೊಟ್ಟು ಮಂತ್ರಾಕ್ಷತೆ ತೆಗೆದುಕೊಳ್ಳುವುದು.

ಅಸ್ಥಿ ಶುದ್ಧಕ್ಕೆ-ಸ್ನಾನಕ್ಕೆ ಅನುಕೂಲವಾದ ಸ್ಥಳ ನಿಶ್ಚಯಿಸುವುದು.

ಬ್ರಾಹ್ಮಣರು ಇಬ್ಬರು

| | |
|---|---|
| ಶೇದಿ -ದರ್ಭೆ | ತುಪ್ಪ ಸಿದ್ಧೆ |
| ಹಲಸು - ಮಾವಿನ ತುಂಡೆ | ಎಳ್ಳುಪಾವು |
| ತುಳಸಿ -ಗಂಧ -ಹೂ | ಸಕ್ಕರೆ-ಬಾಳೆಹಣ್ಣು |
| ಪುಣ್ಯಾಹ ಪಾತ್ರೆ | ವಿಳ್ಯದೆಲೆ-ಅಡಿಕೆಹೋಳು |
| ಪಂಚಕವಳಕ್ಕೆ ಪಾತ್ರೆ | ಮಣ್ದಾನಕ್ಕೆ ತಟ್ಟೆ |
| ಹರಿವಾಣ-ಕವಳಿಗೆ ಸೌಟು | ವಿಭೂತಿ |
| ತಂಬಿಗೆ | ಮೃತ್ತಿಕೆ |
| ಆಜ್ಯಸ್ಥಾಲಿ-ಪ್ರಣೀತ ಪಾತ್ರೆ | ಅಸ್ಥಿ ಅಂಡೆ |
| ಕತ್ತಿ-ಹಾರೆ | ರೊಕ್ಕ - ರೂಪಾಯಿ |
| ಹಲಸಿನ ಚೆಕ್ಕೆ | ಪೂಜಾ |
| ಹಂಚೆ-ದಿಂಡು | ವಸ್ತ್ರ ೩ |
| ಗೋಮೂತ್ರ-ಗೋಮಯ | ಯಜ್ಞೋಪವೀತ |
| ಪಂಚಾಮೃತ ಸಾಹಿತ್ಯ | ತೆಂಗಿನ ಕಾಯಿ |
| ಶೀಯಾಳ ೨ | ಅಕ್ಕಿ-ಸೇರು |
| ಸಮಿಧ ೨೫ ಕಲಶ | |
| ಅಸ್ಥಿ ನಂತರ ಇಡಲಿಕ್ಕೆ ಕರಡಿಕೆ | |

ದಾನ

1. ತಿಲ
2. ಗೋವು

3. ಆಜ್ಯ
4. ವಸ್ತ್ರ
5. ಕಲಶ ದಾನ

**ಅಸ್ಥಿ ಕಟ್ಟಲಿಕ್ಕೆ**

1. ಕೃಷ್ಣಾಜಿನ, 2. ಗೋಕೇಸರ, 3. ಪಟ್ಟೆಚೂರು, 4. ಬುಜ ಪಾತ್ರೆ, 5. ಸೆಣಬಿನ ನಾರು, 6. ಹಸಿ ಓಲಿ, 7. ಪಂಚರತ್ನ.

**ಯಜಮಾನ ಅಸ್ಥಿಗೆ ಕೃಚ್ಛ್ರಪೂರ್ವಕ ಸ್ನಾನ**

ಕ್ಷೀರ-ದಧಿ-ಘೃತ-ಮೃತ್ತಿಕ-ಗೋಮಯ-ಸ್ನಾನ, ನಂತರ ಹೋಮ, ತಿಲಘೃತದಿಂದ, ಬ್ರಹ್ಮಾರ್ಪಣ, ಅಸ್ತಿಗೆ, ಪಂಚಾಮೃತ, ಕಲಶ, ಮಾರ್ಜನ, ಧೂಪ-ದೀಪ-ನೈವೇದ್ಯ-ಆರತಿ, ಬ್ರಹ್ಮಾರ್ಪಣ.

**ಹಿರಣ್ಯ ಶ್ರಾದ್ಧ**

ಮೂರು ಸ್ಥಾನ, ಆಸನ-ಆವಾಹನ-ಅರ್ಘ್ಯ. ಮೂರು ಕಡೆ ದುಡ್ಡು (ಪಿಂಡದ ಬಗ್ಗೆ) ಪಿಂಡ, ನೈವೇದ್ಯ-ಮಂತ್ರಾಕ್ಷತೆ-ಬ್ರಹ್ಮಾರ್ಪಣ

**ಓಂ ಶಾಂತಿ ಶಾಂತಿ ಶಾಂತಿಃ**

ಆತ್ಮೀಯರೇ

ನಮ್ಮ ಪ್ರೀತ್ಯರಾದ .............. ತಾ / / / ರಂದು ______ ವಾರರಂದು ಸ್ವರ್ಗಸ್ಥರಾದರೆಂದು ತಿಳಿಸಲು ವಿಷಾದಿಸುತ್ತೇವೆ. ಶ್ರೀ ಪ್ರಿಯುಕ್ತ ಮೃತರ ಸದ್ಗತಿಗಾಗಿ ಸ್ವಗೃಹದಲ್ಲಿ ನಡೆಯುವ "ವೈದಿಕ ಪೋಕ್ರಿಯಾದಿ" ಗಳಿಗೆ ಆಗಮಿಸಿ ಮೃತರ ಆತ್ಮಕ್ಕೆ ಸದ್ಗತಿಯನ್ನು ಕೋರಿ, ನಮ್ಮನ್ನು ಹರಸಬೇಕಾಗಿ ಅಪೇಕ್ಷಿಸು...

[illegible] ಯರ ಹೆಸರು

ತಾ ______ ವಾರ ಧರ್ಮೋದಕ.
ತಾ ______ ವಾರ ವೃಷೋತ್ಸರ್ಗ
ವಾರ ಸಪಿಂಡೀಕರಣ
ತಾ ______ ವಾರ ಶ್ರಾದ್ಧ ಆರಾಧನೆ
ತಾ ______ ವಾರ ವೈಕುಂಠ ಸಮಾರಾಧನೆ.